ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್
'MUNJAVU' Kannada Weekly, KOPPA - CHM. ಫೋನ್ : 114
8ನೇ ವರ್ಷ 2ನೇ ಸಂಚಿಕೆ ಕೊಪ್ಪ 27-8-1989 ಭಾನುವಾರ ಬೆಲೆ 50 ಪೈಸೆ

## ಸಂಬಾರ ವಸ್ತುಗಳ ವ್ಯಾಪಾರ ನಿಗಮದಿಂದ ಕೊಪ್ಪದಲ್ಲಿ ಏಲಕ್ಕಿ ವಹಿವಾಟು ಆರಂಭ

ಕೊಪ್ಪ: ಭಾರತ ಸರ್ಕಾರದ ಉದ್ಯಮವಾದ ಸಂಬಾರ ವಸ್ತುಗಳ ವ್ಯಾಪಾರ ನಿಗಮ (ಸ್ಪೈಸಸ್ ಟ್ರೇಡಿಂಗ್ ಕಾರ್ಪೋರೇಶನ್) ದವರು ಆ. 21ರಿಂದ ಇಲ್ಲಿನ ಸಂಬಾರ ಮಂಡಳಿ ಕಛೇರಿ ಆವರಣದಲ್ಲಿ ಏಲಕ್ಕಿ ಖರೀದಿ ಆರಂಭಿಸಿದ್ದಾರೆ.

ಪ್ರತಿ ಶನಿವಾರ ಮತ್ತು ಭಾನುವಾರ ಬೆಳಿಗ್ಗೆ 9ರಿಂದ ಮಧ್ಯಾಹ್ನ 3 ಗಂಟೆಯವರೆಗೂ ವ್ಯಾಪಾರ ನಡೆಸುತ್ತಿದ್ದು, ಬೆಳೆಗಾರರು ಈ ಸೌಕರ್ಯವನ್ನು ಸಮರ್ಪಕವಾಗಿ ಉಪಯೋಗಪಡಿಸಿಕೊಳ್ಳಬೇಕೆಂದು ನಿಗಮದ ಮಾರ್ಕೆಟಿಂಗ್ ಮ್ಯಾನೇಜರ್ ಕೆ. ಸಿ. ಪೊನ್ನಣ್ಣ ವಿನಂತಿಸಿದ್ದಾರೆ

# ಕೊಪ್ಪಕ್ಕೆ ತಾಳೆ ಎಣ್ಣೆ ಪೂರೈಕೆಗೆ ಆಗ್ರಹ

ಕೊಪ್ಪ : ಈಗ್ಗೆ ನಾಲ್ಕೈದು ತಿಂಗಳಿಂದ ತಾಳೆ ಎಣ್ಣೆ ಸರಬರಾಜು ಇಲ್ಲದಿದ್ದು, ಈ ತಿಂಗಳಲ್ಲಿ ನೆರೆಯ ತಾ||ಗಳಲ್ಲಿ ಹಂಚಿಕೆಯಾಗಿದ್ದರೂ ಈ ತಾಲ್ಲೂಕಿಗೆ ಬಂದಿಲ್ಲ, ನಾಗರಿಕ ಪೂರೈಕೆ ಅಧಿಕಾರಿಗಳು ಕೂಡಲೇ ಈ ತಾಲ್ಲೂಕಿಗೂ ತಾಳೆ ಎಣ್ಣೆ ಸರಬರಾಜು ಏರ್ಪಡಿಸಬೇಕೆಂದು ಗ್ರಾಹಕರು ಒತ್ತಾಯಿಸಿದ್ದಾರೆ.

ಈ ಬಗ್ಗೆ ತಾ.ವ್ಯ.ವ್ಯಾ.ಸ. ಸಂಘದಲ್ಲಿ ವಿಚಾರಿಸಿದಾಗ, ತಾಲ್ಲೂಕಿಗೆ ನಿಗದಿಯಾಗುವ 1000-2000 ಕಿಲೊ ಎಣ್ಣೆಯ ಸಾಗಣೆ ಇತ್ಯಾದಿ ಖರ್ಚುಗಳು ತುಂಬಾ ಹೆಚ್ಚಾಗುತ್ತಿದ್ದು, ಈ ಬಾಬ್ತಿನಲ್ಲಿ ಸಂಘಕ್ಕೆ ಈಗಾಗಲೇ 25 ಸಾವಿರ ರೂ. ನಷ್ಟವಾಗಿರುವುದರಿಂದ 10 ಸಾವಿರ ಕಿಲೋಗಿಂತ ಕಡಿಮೆ ಕೋಟಾವನ್ನು ತರಲು ಆಗುವುದಿಲ್ಲವೆಂಬ ಸಂಘದ ಅಹವಾಲನ್ನು ಒಪ್ಪಿ, ಆಹಾರ ಮತ್ತು ನಾಗರಿಕ ಪೂರೈಕೆ ನಿಗಮದವರು ತಾವೇ ಎಣ್ಣೆ ತಂದು ಕೊಡುವುದಾಗಿ ಹೇಳುತ್ತಲೇ ಇದ್ದಾರೆ ಆದರೆ ಈವರೆಗೆ ಈ ಕ್ರಮ ಕೈಗೊಂಡಿಲ್ಲ ಎಂದು ತಿಳಿದು ಬಂದಿದೆ

10 ಸಾವಿರ ಕಿಲೊ ಈ ತಾಲ್ಲೂಕಿಗೆ 2 ತಿಂಗಳಿಗೆ ಸಾಕಾಗುತ್ತದೆನ್ನಲಾಗಿದ್ದು. ನಿಗಮದವರು ಕೂಡಲೇ ಈ ಬಗ್ಗೆ ಕ್ರಮ ಕೈಗೊಳ್ಳಬೇಕೆಂದು ಗ್ರಾಹಕರು ಆಗ್ರಹಿಸಿದ್ದಾರೆ.

## ನವೋದಯ ಶಾಲೆಗೆ ಕೊಪ್ಪ ತಾ||ನಿಂದ 9 ಮಕ್ಕಳ ಆಯ್ಕೆ

ಕೊಪ್ಪ : ಬಾಳೆಹೊನ್ನೂರಿನ ನವೋದಯ ಶಾಲೆಗೆ ಈ ತಾಲ್ಲೂಕಿನ 'ಕೋಟಾ' (9) ಈವರೆಗೂ ಭರ್ತಿಯಾಗದೆ ಬೇರೆ ತಾ||ಗಳಿಗೆ ಸಿಗುತ್ತಿದ್ದು, ಈ ಸಲ ಬೇಸಿಗೆ ರಜೆಯಲ್ಲಿ ಜೇಸೀಸ್ ಸಹಯೋಗದಲ್ಲಿ ನಡೆಸಿದ ಪರೀಕ್ಷಾ ಮಾರ್ಗದರ್ಶನ ಶಿಬಿರದಿಂದಾಗಿ ತಾ||ನಿಂದ 9 ಮಕ್ಕಳು ಆಯ್ಕೆಯಾಗಿದ್ದಾರೆಂದು ಎ. ಇ. ಒ. ಜಾಮರಾಜ್ ತಿಳಿಸಿದ್ದಾರೆ.

ಆಯ್ಕೆಯಾದವರು : ಕೆ. ಆರ್. ರೇಖಾ, ಗಿರಿಧರ, ಸಿ ಟಿ. ಸಂತೋಷ್, ಕೆ. ಬಿ. ಪ್ರವೀಣ್ (ಕೊಪ್ಪ ಕಾನ್ವೆಂಟ್), ಸಂತೋಷ್ ನಾಯಕ್ (ಹರಿಹರಪುರ), ಶಂಕರ ಪ್ರಸಾದ್ (ಗುಂಡಕಲ್), ಇ.ಎಸ್. ವಾಣಿ ಮತ್ತು ಎಸ್. ಎನ್. ರಮ್ಯರಾಣಿ (ಹಿರೇಕೊಡಿಗೆ), ಶಶಿಕಲಾ (ಅಗಳಗಂಡಿ.)

## ಕೊಪ್ಪ ತಾ||ನಲ್ಲಿಗಾಳಿ-ಮಳೆಗೆ ಮನೆ ಕಳೆದುಕೊಂಡವರಿಗೆ 11,600ರೂ.ಪರಿಹಾರನೀಡಿಕೆ

ಕೊಪ್ಪ : ಕಳೆದ ತಿಂಗಳ ತೀವ್ರ ಗಾಳಿ-ಮಳೆಯಲ್ಲಿ ಮನೆ ಕಳೆದುಕೊಂಡ ಈ ತಾಲ್ಲೂಕಿನ 26 ಮಂದಿಗೆ ಈವರೆಗೆ 11,600 ರೂ. ಪರಿಹಾರ ವಿತರಿಸಲಾಗಿದೆ. ಇಂಥ 39 ಅರ್ಜಿಗಳು ಈವರೆಗೆ ಬಂದಿದ್ದು, ಇನ್ನೂ ಬರುತ್ತಿವೆ. ಈ ಬಾಬ್ತು ತಾಲ್ಲೂಕಿಗೆ 35 ಸಾವಿರ ರೂ. ಅನುದಾನ ಬಂದಿದೆ.

ಇದಲ್ಲದೆ ಗದ್ದೆಗೆ ನಷ್ಟವಾದ 56 ಮತ್ತು ಅಡಿಕೆ ತೋಟ/ಫಸಲಿನ ನಷ್ಟದ 713 ಅರ್ಜಿಗಳೂ ಬಂದಿವೆ. ಆದರೆ ಈ ಬಗ್ಗೆ ಯಾವುದೇ ಪರಿಹಾರ ಧನ ಇನ್ನೂ ಮಂಜೂರಾಗಿ ಬಂದಿಲ್ಲವೆಂದು ತಹಸೀಲ್ದಾರ್ ಜಿ. ಎಸ್. ನಾಯಕ್ ತಿಳಿಸಿದ್ದಾರೆ

## ಬಗರ್‌ಹುಕುಂ ಸಾಗುವಳಿಯ ಬಡ ರೈತರನ್ನು ಒಕ್ಕಲೆಬ್ಬಿಸದಿರಲು ಎ ಐ ಕೆ ಎಸ್ ಮನವಿ

ಕೊಪ್ಪ : ಇಲ್ಲಿಗೆ ಸಮೀಪದ ಬಪ್ಪುಂಜಿಯಲ್ಲಿ ನುಗ್ಗಿ ಗ್ರಾಮದ ಸ. ನಂ. 61, 81 ಮತ್ತು 105ರ ಸುಮಾರು 50-60 ಎಕರೆ ಪ್ರದೇಶದಲ್ಲಿ (ಕೊರ್ಡಹಿತ್ಲು ರಸ್ತೆ ಮತ್ತು ದೇವನ್ ರಸ್ತೆಗಳ ನಡುವಿನ ಇಳಿಜಾರು ಪ್ರದೇಶ) 15 ವರ್ಷಗಳಿಂದ ಬಗರ್ ಹುಕುಂ ಸಾಗುವಳಿ ಮಾಡುತ್ತಿರುವ ಬಡ ರೈತರನ್ನು ಒಕ್ಕಲೆಬ್ಬಿಸದಂತೆ ಸಿ ಪಿ ಐ ಸಹ ಸಂಘಟನೆಯಾದ ಅಖಿಲ ಭಾರತ ಕಿಸಾನ್ ಸಭೆ ಮನವಿ ಮಾಡಿದೆ.

ಈ ಪೈಕಿ ಕೆಲವರಿಗೆ ಮಂಜೂರಾತಿ, ಮತ್ತೆ ಕೆಲವರಿಗೆ ಟಿ.ಟಿ. ರಿಕಾರ್ಡ್ ಆಗಿದ್ದಾಗ್ಯೂ ಅರಣ್ಯ ಇಲಾಖೆಯವರು ಆ ಪ್ರದೇಶವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಬೇಲಿಗಾಗಿ ಕಲ್ಲುಕಂಬಗಳನ್ನು ಸಂಗ್ರಹಿಸಿರುವುದನ್ನು ಆ. 16 ರಂದು ಕೆ. ಭೋಜ ಭಂಡಾರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆ ಖಂಡಿಸಿತು.

ಅಲ್ಲಿನ ರೈತರು ಸಭೆಯ ನಂತರ ಮೆರವಣಿಗೆಯಲ್ಲಿ ತೆರಳಿ,ಡಿಎಫ್‌ಒ ಮತ್ತು ತಹಸೀಲ್ದಾರರಿಗೆ ಈ ಕುರಿತು ಮನವಿ ಸಲ್ಲಿಸಿ, ಚಿಕ್ಕಮಗಳೂರಿನ ಸರ್ವೆ ಡಿಎಫ್‌ಒ ಅವರಿಗೂ ಮನವಿ ಕಳಿಸಿದರು.

ಅರಣ್ಯ ಪ್ರದೇಶವಲ್ಲದ ಈ ಭೂಮಿಯ ಬಗ್ಗೆ ಅರಣ್ಯ ಇಲಾಖೆ ರೈತರ ಮೇಲೆ ದೌರ್ಜನ್ಯ ಎಸಗಿದಲ್ಲಿ ತೀವ್ರ ಹೋರಾಟ ನಡೆಸಲೂ ಸಭೆ ತೀರ್ಮಾನಿಸಿತು ಎಂದು ಕಾರ್ಯದರ್ಶಿ ಎಲ್. ಆರ್. ರಾಮಚಂದ್ರ ತಿಳಿಸಿದ್ದಾರೆ.

## ಕೊಪ್ಪದಲ್ಲಿ 108" ಮಳೆ

ಕೊಪ್ಪ: ಇಲ್ಲಿ ಈ ವರ್ಷದ ಮಳೆಗಾಲದಲ್ಲಿ ಪೇಟೆಯಲ್ಲಿ 108 ಅಂಗುಲ ಮಳೆಯಾಗಿದ್ದು, ಬಾಳಗಡಿಯಲ್ಲಿ 92, ಕೊಪ್ಪ ಎಸ್ಟೇಟ್ ಮತ್ತು ಕೊರ್ಡಹಿತ್ಲಿನಲ್ಲಿ 96, ಸಮೀಪದ ನೇಕ್ರಕಲ್‌ನಲ್ಲಿ 120 ಮತ್ತು ಬಸರಿಕಟ್ಟೆ ಸುತ್ತಮುತ್ತ 130 ಅಂಗುಲ ಕ್ಕೂ ಹೆಚ್ಚು ಮಳೆಯಾಗಿದೆ.

ಆಗುಂಬೆಯಲ್ಲಿ ಆ. 25ರವರೆಗೆ 256 ಅಂಗುಲ ಮಳೆ ಆಗಿರುವುದಾಗಿ ವರದಿಯಾಗಿದೆ

## ಕುವೆಂಪು ಸಾಹಿತ್ಯ ವಿಚಾರ ಸಂಕಿರಣ, ಕವಿ ಗೋಷ್ಠಿ

ಶೃಂಗೇರಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್‌ನವರು 'ವಸಂತ ಸಾಹಿತ್ಯೋತ್ಸವ'ದ ಅಂಗವಾಗಿ "ಕುವೆಂಪು ಸಾಹಿತ್ಯ ವಿಚಾರ ಸಂಕಿರಣ"ವನ್ನು 10-9-89ನೇ ಭಾನುವಾರ ಏರ್ಪಡಿಸಿದ್ದು, ಇದರ ಜೊತೆಗೆ ತಾಲ್ಲೂಕು ಮಟ್ಟದ ಕವಿ ಗೋಷ್ಠಿಯನ್ನೂ ನಡೆಸಲಿದ್ದಾರೆ.

ಸ್ವರಚಿತ ಕವನಗಳ ವಾಚನ ಮಾಡಲು ಆಸಕ್ತಿಯಿರುವವರು ತಮ್ಮ ಹೆಸರನ್ನು, ವಾಚನ ಮಾಡಲಿರುವ ಕವನದ ಒಂದು ಪ್ರತಿಯೊಂದಿಗೆ, ತಾಲ್ಲೂಕ್ ಪ್ರತಿನಿಧಿ ದ. ರಾಜಣ್ಣ ಇವರಲ್ಲಿ ದಿನಾಂಕ. 30-8-89 ರೊಳಗಾಗಿ ನೊಂದಾಯಿಸಲು ಕೋರಲಾಗಿದೆ.

## ಸೇತುವೆ, ರಸ್ತೆ ಜಖಂ : ರಿಪೇರಿಗೆ ಆಗ್ರಹ

ಜಯಪುರ : ಇಲ್ಲಿಗೆ ಸಮೀಪದ ದೂಬಳ ರಸ್ತೆಯಲ್ಲಿರುವ ದೂಬಳಸೇತುವೆಯ (ನಿಡುವಾಣೆ ಸೇತುವೆ) ಬದಿಯ ಕಟ್ಟೆ ಶಿಥಿಲಗೊಂಡಿದ್ದು, ಅದು ಹೆಚ್ಚು ಜಖಂ ಆಗಿ ಪ್ರಾಣಾಪಾಯದಂಥ ಅನಾಹುತ ಸಂಭವಿಸುವ ಮೊದಲೇ ಸಂಬಂಧಪಟ್ಟವರು ಕೂಡಲೇ ಗಮನ ಹರಿಸಿ ದುರಸ್ತಿ ಮಾಡಿಸಬೇಕಾಗಿ ಗ್ರಾಮಸ್ಥರು ಆಗ್ರಹಿಸಿದ್ದಾರೆ.

ಜಯಪುರ - ಬಸರಿಕಟ್ಟೆ ರಸ್ತೆ

ಇಲ್ಲಿಂದ ಬಸರಿಕಟ್ಟೆಗೆ ಹೋಗುವ ರಸ್ತೆಯಲ್ಲಿ ಉದ್ದಕ್ಕೂ ಹೊಂಡಗಳು ತುಂಬಿ, ದಿನವಹಿ ಸಂಚರಿಸುವ ನೂರಾರು ವಾಹನಗಳಿಗೆ ವಿಪರೀತ ತ್ರಾಸದಾಯಕವಾಗಿದೆ. ಬಸರಿಕಟ್ಟೆಯ ಬಳಿ ಮಾತ್ರ ರಿಪೇರಿ ನಡೆಯುತ್ತಿದ್ದು ಉಳಿದ ಭಾಗದಲ್ಲೂ ರಿಪೇರಿ ಮಾಡಬೇಕೆಂದು ಗುಡ್ಡೆತೋಟದ ಎಂ.ವಿ. ಗಂಗಾಧರ್ ಒತ್ತಾಯಿಸಿದ್ದಾರೆ

# ವನಮಹೋತ್ಸವವ್ರೋ,ರಾಜಕೀಯಸಭೆಯೋ?

ಶೃಂಗೇರಿಯಲ್ಲಿ ಕಳೆದ ವಾರ ಕಾಲೇಜಿನ ಎನ್.ಎಸ್.ಎಸ್., ಜೇಸೀಸ್, ಕೆನರಾ ಬ್ಯಾಂಕ್ ಮತ್ತು ಅರಣ್ಯ ಇಲಾಖೆಗಳ ಆಶ್ರಯದಲ್ಲಿ ನಡೆದ ವನ ಮಹೋತ್ಸವ ಕಾರ್ಯಕ್ರಮ ಒಂದು ರಾಜಕೀಯ ಸಭೆಯಂತೆ ನಡೆದುದನ್ನು ನೋಡಿ ಸಹಿಸಲಾಗದೆ ಇದನ್ನು ಬರೆಯಬೇಕಾಗಿದೆ.

ವೃತ್ತಿ ರಾಜಕಾರಣಿ ಡಿ.ಕೆ. ತಾರಾದೇವಿ ಮಾಮೂಲಿನಂತೆ 4 ಗಂಟೆಯ ಕಾರ್ಯಕ್ರಮಕ್ಕೆ ನಾಲ್ಕೂ ಮುಕ್ಕಾಲಿಗೆ ಬಂದುದು ಮಾತ್ರವಲ್ಲ, ವನಮಹೋತ್ಸವದ ಉದ್ಘಾಟನೆಗೆ ನೆಪಕ್ಕೆ ಕೂಡ ಒಂದು ಗಿಡ ನೆಡಲಿಲ್ಲ; ಕೇವಲ ಒಂದು ಗಿಡವನ್ನು ಮುಟ್ಟಿ ಉದ್ಘಾಟನೆಯ 'ಶಾಸ್ತ್ರ' ಮಾಡಿದರು.

ನಂತರ ಅವರ ಭಾಷಣದಲ್ಲೂ ಅವರು ಆಫ್ರಿಕದ ಪರಿಸರ ನಾಶ, ಪ್ರಪಂಚದ ಪರಿಸರ ಸಮಸ್ಯೆ, ಓಝೋನ್ ಕವಚ ನಶಿಸುತ್ತಿರುವುದು ಮುಂತಾಗಿ ವಿಶ್ವ ಮಟ್ಟದಲ್ಲೇ ಮಾತನಾಡಿದರು. ಆದರೆ ನಮ್ಮ ಸುತ್ತು ಮುತ್ತಿನದೇ ಪರಿಸರ ವಿನಾಶದ ಯೋಜನೆಗಳಾದ ಮಾಲತಿ, ಭದ್ರಾ ಮೇಲ್ದಂಡೆ, ಶರಾವತಿ ಟೇಲ್‌ರೇಸ್, ವಾರಾಹಿ ಇತ್ಯಾದಿಗಳ ಬಗೆಗಾಗಲಿ, ಅತ್ಯಂತ ದುರಂತಮಯ ಭವಿಷ್ಯವನ್ನು ನಮ್ಮ ಮುಂದಿಟ್ಟಿರುವ ಕೈಗಾ ಅಣುಸ್ಥಾವರದ ಬಗೆಗಾಗಲಿ ಅವರು ಗಮನ ನೀಡಲೇ ಇಲ್ಲ. ಅಥವಾ ಅವರ ಶಿಷ್ಯಮಣಿಗಳಿಂದಲೇ ಆಗುತ್ತಿರುವ ವ್ಯಾಪಕ ಅರಣ್ಯ ನಾಶದ ಬಗೆಗೂ ಅವರು ಚಕಾರವೆತ್ತಲಿಲ್ಲ. ಈ ಸಮಾರಂಭಕ್ಕೆ ಸಲ್ಲದ ಎಷ್ಟೋ ಮಾತುಗಳನ್ನಾಡಿದರು.

ಉದ್ಘಾಟನೆ, ಅಧ್ಯಕ್ಷತೆಗಳ ಹಕ್ಕುದಾರರಾದ ಇಂಥವರು ಇಂಥ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಮೊದಲು, 'ಇರುವುದೊಂದೇ ಭೂಮಿ', 'ಭಾರತದ ಪರಿಸರ ಸಮೀಕ್ಷೆ', 'ನಮಗೆಲ್ಲರಿಗೂ ಒಂದೇ ಭವಿಷ್ಯ', 'ಮನು ಕುಲ ವಿನಾಶಕ್ಕೆ ಅಣುಬಾಂಬ್ ಬೇಕಿಲ್ಲ, ಅಣುಸ್ಥಾವರ ಸಾಕು' ಇಂಥ ಒಂದೇಡಾದರೂ ಪುಸ್ತಕಗಳನ್ನು ಓದಿ ಅರ್ಥ ಮಾಡಿಕೊಂಡರೆ ಎಷ್ಟೋ ಲೇಸು.

ಕಾರ್ಯಕ್ರಮ ನಿರ್ವಹಿಸಿದ ಕಾಲೇಜು ಎನ್ನೆಸ್ಸೆಸ್ ಅಧಿಕಾರಿ ವೀರಪ್ಪ ಗೌಡರು ತಮ್ಮ ವಾಕ್ಚಾತುರ್ಯ ಪ್ರದರ್ಶನದ ಅವಸರದಲ್ಲಿ, ಚಿತ್ರವಿಚಿತ್ರ ಭಾಷೆಯಲ್ಲಿ ಅನಗತ್ಯ ಮಾತುಗಳನ್ನಾಡುತ್ತ ಕೆಲವೊಮ್ಮೆ

(3ನೇ ಪುಟಕ್ಕೆ)

ಸ್ಮರಣೆ :

# ಸಾಮಾನ್ಯರಲ್ಲೊಬ್ಬ ಅಸಾಮಾನ್ಯ — ಚಂದ್ರು

ವಿಶ್ವಾಸ ಹುಟ್ಟಿಸುವ ಕಣ್ಣುಗಳು, ಎತ್ತರವಾದ, ಬಲಿಷ್ಠವಾದ ದುಡಿಮೆಯ ದೇಹ, ಇನ್ನೊಬ್ಬರ ಕಷ್ಟಗಳಿಗೆ ಸದಾ ಕರಗುವ ಮೃದು ಮನಸ್ಸು—ಈತ ಇನ್ನಿಲ್ಲವೆಂದರೆ ನಂಬಿಕೆಯಾಗದು. ಜಯಪುರದ ಬಡ ಜನರ ಬದುಕಿನೊಂದಿಗೆ ಬೆರೆತುಹೋಗಿದ್ದ ಈತ ಚೌಡಿಕಟ್ಟೆಯ ಚಂದ್ರು. ಜಯಪುರದಲ್ಲಿ ಈಗಲೂ ಟಿವಿಎಸ್ ಸ್ಕೂಟರ್ ಶಬ್ದ ಕೇಳಿದರೆ ಅವನೇ ಬಂದನೇನೋ ಎಂದು ಮನಸ್ಸು ಗರಿಗೆದರಿ ನಿರೀಕ್ಷಿಸುತ್ತದೆ.

ಈ ಮಲೆಯಾಳಿ ಯುವಕ ಎಚ್ಚೆತ್ತ ಭಾರತೀಯತೆಯ ಪ್ರತಿರೂಪದಂತಿದ್ದ. ಸ್ವಾರ್ಥ, ಸ್ವಜನ ಪಕ್ಷಪಾತ, ಪರಹಿಂಸಾಪ್ರಿಯತೆ, ಜಾತೀಯತೆ, ಮೂಢ ನಂಬಿಕೆಗಳ ಈ ಸಮಾಜದಲ್ಲಿ ಅವುಗಳ ಪರಿಧಿಯಿಂದ ಹೊರಗೆ ಬದುಕಿದವ. ವಿದ್ಯೆ ಪ್ರಾಥಮಿಕ ಹಂತಕ್ಕೇ ನಿಂತರೂ, ವೈಚಾರಿಕತೆಗೆ ಶಾಲಾ ಕಲಿಕೆಯೊಂದೇ ಮುಖ್ಯವಲ್ಲ ಎಂಬುದಕ್ಕೆ ನಿದರ್ಶನದಂತಿದ್ದ.

ತುಂಬಾ ಬಡತನದ, ದುಡಿಮೆಗಾರ ಮಲಯಾಳಿ ಕುಟುಂಬದಲ್ಲಿ ಹುಟ್ಟಿದ ಚಂದ್ರು ಚಿಕ್ಕಂದಿನಲ್ಲಿ ಪೋಲಿ ಎನ್ನಿಸಿಕೊಂಡು ವಿದ್ಯೆಗೆ ತಿಲಾಂಜಲಿ ಇತ್ತರೂ, ಮುಂದೆ ಒಳ್ಳೆಯ ದುಡಿಮೆಗಾರನಾದ. ಮರಗೆಲಸ ಅವನ ವೃತ್ತಿ. ಚಿಕ್ಕಮಗಳೂರಿನ ಗಿರಿ ಪ್ರದೇಶದಲ್ಲಿ ಕೆಲಸ ಮಾಡಿಕೊಂಡಿದ್ದಾಗ ಪರಿಚಯವಾದ ಯುವತಿ ಸಿಸಿಲಿಯನ್ನು ಪ್ರೀತಿಸಿ, ಸರಳ ವಿವಾಹ ಮಾಡಿಕೊಂಡು ಜಯಪುರಕ್ಕೆ ಬಂದು ನೆಲೆಸಿದ.

ಕಷ್ಟ ಜೀವಿಯಾದರೂ ಜನ ಸಾಮಾನ್ಯರ ನೆರವಿಗೆ ಸದಾ ಧಾವಿಸುತ್ತಿದ್ದ ಈತನ ಸ್ವಭಾವವನ್ನು ಹಲವರು ದುರುಪಯೋಗಪಡಿಸಿಕೊಂಡಿದ್ದೂ ಇದೆ. ಆಗೆಲ್ಲ ಇವರ ಪತ್ನಿ ಇವರನ್ನು ಟೀಕಿಸುತ್ತಿದ್ದರು. ಇದನ್ನೆಲ್ಲ ನೋಡಿ ನೋಡಿ ಚಂದ್ರು ಈಚೆಗೆ, 'ಯಾರಿಗೂ ಉಪಕಾರವನ್ನೇ ಮಾಡಬಾರದು' ಎಂದು ಹೇಳುತ್ತಿದ್ದರಾದರೂ, ಕಷ್ಟ ಕಂಡಲ್ಲಿ ಇವರ ಈ ನಿರ್ಧಾರ ಸಡಿಲವಾಗುತ್ತಿತ್ತು.

ತನಗೆ ಸರಿ ಎನ್ನಿಸಿದ ವಿಚಾರದ ಬಗ್ಗೆ ವಾದಿಸುತ್ತ, ಕೆಲವೊಮ್ಮೆ ಜಗಳ ಕೂಡ

(3ನೇ ಪುಟಕ್ಕೆ)

# ರಾಹುಲ್ (ಶೋಕ) ಸಂದೇಶ

ರಾಹುಲ್ ಗಾಂಧಿ ತಮ್ಮ ತೋಟದ ಕೊಳದಲ್ಲಿ ಮೀನು ಹಿಡಿಯಲು ಹೋಗಿ ಜಾರಿ ಬಿದ್ದು ಪೆಟ್ಟು ಮಾಡಿಕೊಂಡಿದ್ದಾರೆ. ಅವರನ್ನು ಭಾರತೀಯ ವೈದ್ಯ ವಿಜ್ಞಾನ ಸಂಸ್ಥೆಯ ಆಸ್ಪತ್ರೆಗೆ (ಯಥಾಪ್ರಕಾರ ಅತ್ಯಂತ ಬಿಗಿ ಕಾವಲಿನಲ್ಲಿ) ದಾಖಲು ಮಾಡಲಾಗಿದೆ. (ಸುದ್ದಿ)

ಇತ್ತ ರಾಜೀವರ ಮನೆಗೆ ಅವರ ಈ ವಂಶೋದ್ಧಾರಕನ (ಜೊತೆಗೆ ಭಾವೀ ದೇಶೋದ್ಧಾರಕನ) ಆರೋಗ್ಯವನ್ನು ವಿಚಾರಿಸುವ 'ಕಳಕಳಿ'ಯ ಫೋನ್ ಕರೆಗಳಿಗೆ ಲೆಕ್ಕವೇ ಇಲ್ಲ. ಲೆಕ್ಕ ಇರುವುದು ಹೋಗಲಿ, ಅವಕ್ಕೆ ಉತ್ತರಿಸುವ ಸಮಯವಾದರೂ ನಮ್ಮ ರೌಂಡ್-ದಿ-ಕ್ಲಾಕ್ ಬಿಝಿ ಪ್ರಧಾನಿಗಾಗಲಿ ಅವರ ಶ್ರೀಮತಿಗಾಗಲಿ ಇದೆಯೆ?

ಆದರೆ, ಹೇಳಿ-ಕೇಳಿ ಸಣ್ಣ-ದೊಡ್ಡ ಕಾಂಗ್ರೆಸ್ ನಾಯಕ ಮಣಿಗಳ ಅಗಾಧ ಸಂಖ್ಯೆಯ ಈ 'ಕಳಕಳಿ'ಯ ಫೋನ್ ಕರೆಗಳೇ ನಾಳಿನ ದೂರದರ್ಶನ, ಆಕಾಶವಾಣಿ, ಪತ್ರಾವಳಿ ಪತ್ರಿಕೆಗಳಿಗೆಲ್ಲ ರಾಷ್ಟ್ರೀಯ ಸುದ್ದಿಯಾಗಲಿರುವಾಗ) ಅವನ್ನು ಪೂರ್ತಿ ಕಡೆಗಣಿಸಲಾದರೂ ಆದೀತೆ ?

ಸರಿ, ಪ್ರಧಾನಿಯವರ ಖಾಸಾ ನಿವಾಸದ ಖಾಸಾ ಎಲೆಕ್ಟ್ರಾನಿಕ್ ಟೆಲಿಫೋನ್ ಎಕ್ಸ್‌ಚೇಂಜ್‌ನಲ್ಲಿ ನಾಲ್ಕೈದು ಎಲೆಕ್ಟ್ರಾನಿಕ್ 'ಆಪರೇಟರ್'ಗಳು ನಿಮಿಷಾರ್ಧದಲ್ಲಿ ವಿಶೇಷವಾಗಿ ಈ ದುಃಖಾರ್ತ ಸಂದೇಶಗಳ ವಿನಿಮಯಕ್ಕೇ ನಿಯುಕ್ತವಾಗುತ್ತವೆ.

ತೀರಾ ತೀರಾ ತೀರಾ ಮುಖ್ಯವಾದ ವ್ಯಕ್ತಿಯ ಕರೆಯನ್ನು ಮಾತ್ರ ಖುದ್ದು ಪ್ರಧಾನಿಗೆ ಸಂಪರ್ಕಿಸುವುದು; ಮಿಕ್ಕವನ್ನೆಲ್ಲ ಮೇಡಂ ಸೋನಿಯಾರವರೇ ರಿಸೀವ್ ಮಾಡುವವರು (ಪ್ರೆಸೆಂಟ್‌ಗಳನ್ನು ರಿಸೀವ್ ಮಾಡಿದಂತೆ !?)

ಪ್ರತಿಯೊಬ್ಬರ ಕಾಲ್‌ಗಳೂ 'ಕ್ಯೂ' ಪ್ರಕಾರವೇ ಒಳಕ್ಕೆ ಕನೆಕ್ಟ್ ಆಗುವುದು. ಆದಕ್ಕೆ ಮೊದಲು ಅವರಿಗೆ ರೆಡಿಮೇಡ್ ಹೆಣ್ಣು ಧ್ವನಿಯೊಂದು ಹೀಗೆ ಸೂಚನೆ ಕೊಡುತ್ತದೆ :

"ನಮಸ್ಕಾರ ಆದೊಡನೆ ನಿಮ್ಮ ಹೆಸರು, ನಿಮ್ಮ ಕ್ಷೇತ್ರ, ನಿಮ್ಮ ಸ್ಥಾನ-ಮಾನದ ಪರಿಚಯ (ಎಂಪಿ, ಎಮ್ಮೆಲ್ಯೆ, ಹಾಲಿ, ಮಾಜಿ, ಭಾವೀ, ಇತ್ಯಾದಿ). ನಂತರ ಎಂಟು ಶಬ್ದಗಳಿಗೆ ಮೀರದಂತೆ ನಿಮ್ಮ ಶೋಕಾಲಾಪ. ಇದೆಲ್ಲ ಒಟ್ಟು ಒಂದು ಸೆಕೆಂಡ್ ಆದೊಡನೆ ಲೈನು ಆಟೋಮ್ಯಾಟಿಕ್ ಆಗಿ 'ಕಟ್' ಆಗುತ್ತೆ...."

## ಹರಟೆ ಕಟ್ಟೆ

* * *

ಕೆಲವು ಆಯ್ದ ಸಂಭಾಷಣೆಗಳು ಹೀಗಿವೆ:

"ನಮಸ್ಕಾರ ಸರ್, ರಾಜೀವ್ ಸರ್.... ನಾನು ಆರ್‌ವಿ....ನಿಮ್ಮ ಪ್ರೆಸಿಡೆಂಟು— ಅಂದ್ರೆ ನೀವೇ ಮಾಡಿದ ಪ್ರೆಸಿಡೆಂಟು— ಅಂದ್ರೆ ರಾಷ್ಟ್ರಪತಿ....ಬಹಳ ದುಃಖವಾಗ್ತಿದೆ ಸರ್....ರಾಹುಲ್...." 'ಕಟ್'.

"....ನಾನು ಬೂಟಾ ಮೇಡಂ.... ಬೂಟ್ ಅಲ್ಲ.... ಗೃಹಮಂತ್ರಿ ಬೂಟಾ ಸಿಂಗ್ ....ನನಗೆ ಮಾತೇ ಹೊರಡ್ತಿಲ್ಲ ಮೇಡಂ...." ಕಟ್

"....ಯಾರ್, ನನಗೆ ಒಂದ್ ಮಾತು ಹೇಳಿದ್ರೆ ಅಜಿತ್‌ಗೆ ಹೇಳಿ ಸ್ವಿಟ್ಜರ್‌ಲೆಂಡಿನಲ್ಲೇ ಫಿಶಿಂಗ್‌ಗೆ ಅರೇಂಜ್ ಮಾಡಿಸ್ತಿದ್ದೆ ನಲ್ಲಾ ಯಾರ್...." ಕಟ್.

"ನಮಸ್ತೆ ಬೆಹೆನ್ ಜಿ, ನಾನು.... ದ್ವಿವೇದಿ............"

"ನಮಸ್ತೆ ಮೇಡಂ, ........ನಾನು— ತ್ರಿವೇದಿ........."

"ನಮಸ್ತೆ ಸೋನಿಯಾಜಿ, ನಾನು...."

"ನೀವು 'ಚತುರ್ವೇದಿ'ಯೇನ್ರಿ ?"

"(ಸ್ವಗತ) ಅರೆ, ಮೇಡಂ ನನ್ನ ಸ್ವರದಿಂದಲೇ ಗುರುತು ಹಿಡಿದು ಬಿಟ್ರು ?! (ಪ್ರಕಟ) ....ಹ್ಹಿಹ್ಹಿ, ಹೌದು ಮೇಡಂ, ರಾಹುಲ್‌ಜೀಗೆ.... ಕಟ್."

"ನಮಸ್ಕಾರ ಮೇಡಂ, ನಾನು ಆಸ್ಕರ್ ಫರ್ನಾಂಡಿಸ್.... ಬಂಗುಡೆ, ಕಂಡಿಗೆ, ಮಾಲಾಯಿ, ಮಾಂಜಿ, ಕಲ್ಲರು, ಎಟ್ಟಿ.... ಯಾವುದು ಬೇಕಂತ ಒಂದ್ಮಾತು ಹೇಳಿದ್ದರೆ ನಾನೇ ಫ್ರೆಶ್ಶಾಗಿ ಹಾಗೆ ಹಿಡಿದು ಹೀಗೆ ತಂದ್ಬಿಡ್ತಿದ್ನಲ್ಲ ಮೇಡಂ ಪ್ಲೇನ್ನಲ್ಲೇ !.... ('ಕಟ್' ಯಾವಾಗಲೋ ಆಗಿ ಹೋಗಿದೆ)

ಇತ್ಯಾದಿ ಇತ್ಯಾದಿ.

—'ಹರಟೆ ಮಲ್ಲ'

ಪದ್ಯ ದಂಕಣ

### ಸ್ವಾತಂತ್ರ್ಯ

ಯಾರಿಗೆ ಬಂತು
ಎಲ್ಲಿಗೆ ಬಂತು
ನಲವತ್ತೇಳರ
ಸ್ವಾತಂತ್ರ್ಯ ?
ಬೋಫೋರ್ಸ್-ಫೇರ್‌ಫ್ಯಾಕ್ಸ್
ವ್ಯವಹಾರದಲ್ಲಿ
ರಾಜೀವ್ ಕೈಗೆ ಸ್ವಾತಂತ್ರ್ಯ.
ಬಾಟ್ಲಿಂಗ್-ಭೂಮಿ
ವ್ಯಾಪಾರದಲ್ಲಿ
ಹೆಗಡೆಗೆ ದಕ್ಕಿತು
ಸ್ವಾತಂತ್ರ್ಯ
ಸರಾಯಿ ಅಂಗಡಿ
ಮುಚ್ಚಿದ ದಿನವೇ
ಕಳ್ಳಭಟ್ಟಿಗೆ
ಸ್ವಾತಂತ್ರ.
ಗಾಂಧಿಯ ಹೆಸರ್ಹೇಳಿ
ಸೇಂದಿಯ ಹಂಚುವ
'ದೇಶ ಭಕ್ಷಕ'ಗೆ
ಸ್ವಾತಂತ್ರ್ಯ !

—ಸುರೇಶ್ ಎಚ್. ವಿ., ಹುಲ್ಕೋಡ್

### ಎರಡು ಹನಿಗವನಗಳು

**ಬದಲಾವಣೆ**

ಮೂಗು ಮೊಂಡೆಂದು
ಮೋಟು ಜಡೆಯೆಂದು
ಹಲ್ಲು ಉಬ್ಬೆಂದು
ಕಣ್ಣು ಮೆಳ್ಳೆಂದು
'ಬಾಡಿ' ಪೀಚೆಂದು
ಅಂದವಿಲ್ಲೆಂದು
ಜರಿದು, ಬೇಡೆಂದವನು
ಅಪ್ಪ ಕೊಡುವ ವರದಕ್ಷಿಣೆ
ಸದ್ದಿಗೆ ಪೂರ್ತಿ ಬದಲಾಗಿ
"ನೀನೇ ನನ್ನ ಸುಂದರಿ"
ಎಂದುಬಿಟ್ಟ !

**ಥಿಯರಿ - ಪ್ರಾಕ್ಟಿಕಲ್**

ತನ್ನ
ಕಥೆ, ಕವನ, ಭಾಷಣಗಳಲ್ಲಿ
ಹೆಣ್ಣಿನ ಶೋಷಣೆಯ ಹಲವು
ಮುಖಗಳನ್ನು ಚಿತ್ರಿಸಿ, ಖಂಡಿಸಿ,
ಅನುಕಂಪ ನೀಡಿದವನ ಥಿಯರಿಗೆ
ಮರುಳಾಗಿ ಕೈ ಹಿಡಿದಾಗ
ಸಿಕ್ಕಿದ್ದು ಬರೀ ಶೋಷಣೆಯ
ಪ್ರಾಕ್ಟಿಕಲ್

—ಭಾನು, ಹಿರೇಗದ್ದೆ.

ಓದುಗರ ಪತ್ರಗಳು

## ಈ ಪ್ರಶಂಸನೀಯ ಕಾರ್ಯ ಅನುಸರಿಸುವರಾರು?

ಮಾನ್ಯರೆ,

ಈ ಸಲದ ಸ್ವಾತಂತ್ರ್ಯ ದಿನದಂದು ದಾವಣಗೆರೆಯಲ್ಲಿ ಸಿರಿಗೆರೆ ಜಗದ್ಗುರು ಡಾ|| ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ಸಾರ್ವಜನಿಕರೊಂದಿಗೆ ಮದ್ಯಪಾನ ನಿಷೇಧಕ್ಕೆ ಒತ್ತಾಯಿಸಿ ನಡೆಸಿದ ಪಾದಯಾತ್ರೆ ಪ್ರಶಂಸನೀಯವಾದುದು. ಆದರೆ ಅವರೇ ಹೇಳಿದಂತೆ, ಒಬ್ಬ ವ್ಯಕ್ತಿ ಅಥವ ಒಂದು ಸಂಘಟನೆಯಿಂದ ಈ ಕಾರ್ಯ ಸಾಧನೆ ಅಸಾಧ್ಯ.

ಆದ್ದರಿಂದ, ಅವರು ಹಾಕಿಕೊಟ್ಟ ಹಾದಿಯಲ್ಲಿ ನಮ್ಮ ಉಳಿದ ನಿಷ್ಕ್ರಿಯ ಮಠಾಧಿಪತಿಗಳು ಸಾರ್ವಜನಿಕರ ಸಹಕಾರದೊಂದಿಗೆ ಇಂಥ ಜನ ಹಿತ ಆಂದೋಲನ ಕೈಗೊಂಡು ಜನ ಸೇವೆ ಮಾಡುವರೆಂದು ನಿರೀಕ್ಷಿಸೋಣವೆ ?

—ಸುರೇಶ್, ಎಚ್. ವಿ.
ಹುಲ್ಕೋಡು, ಹಾಲ್ಮುತ್ತೂರು.

## 'ಅಡಿಕೆ ಸಂಭಾವನೆ' ಕಾಟ ತಡೆಗೆ ಏನು ಮಾಡೋಣ?

ಮಾನ್ಯರೆ,

ಕಳೆದ ವಾರದ ನಿಮ್ಮ ಸಂಚಿಕೆಯಲ್ಲಿ ಅಡಿಕೆ ಬೆಳೆಗಾರರ ಸಂಘಟನೆ ಕುರಿತು ವಸಂತಕುಮಾರ್‌ರ ಪತ್ರ ಸರಿಯಾಗಿದೆ. ಈ ವರ್ಷ ಅಡಿಕೆ ಬೆಳೆಗಾರರಿಗೆ ಎಲ್ಲಾ ತರಹದಿಂದಲೂ ತೊಂದರೆಯಾಗಿದೆ. ಬಹುಶಃ 2 ಎಕರೆಗೆ 1 ಕ್ವಿಂಟಾಲ್ ಅಡಿಕೆ ನಾಶವಾಗಿರಬಹುದು.

ಇಷ್ಟು ಕಷ್ಟ-ನಷ್ಟ ಸಾಲದೆಂಬಂತೆ, ನವೆಂಬರ್-ಡಿಸೆಂಬರ್ ಬಂತೆಂದರೆ ಸಾಕು, ಅಡಿಕೆ ಸಂಭಾವನೆಯವರ ಕಾಟ ಶುರು. ಹಿಂದೆಲ್ಲಾ ಬಡವರು ಮತ್ತು ಗುರುತಿನವರು ಕೆಲವರು ಮಾತ್ರ ಬರುತ್ತಿದ್ದರು. ಆದರೆ ಈಗ ಹಾಗಲ್ಲ. ತಂಬೂರಿ, ಖಂಜರ, ಹಾರ್ಮೋನಿಯಂಗಳನ್ನು ಹಿಡಿದುಕೊಂಡು, ಕೀಳು ಕಂಠದಿಂದ ಯಾವುದಾದರೂ ದಾಸರ ಪದವನ್ನು ತಪ್ಪಾಗಿ ಹೇಳುತ್ತಾ ಸಾಲುಗಟ್ಟಿ ಬರುತ್ತಾರೆ.

ನಾನಾ ತರದ ಸುಳ್ಳು ಹೇಳಿಕೊಂಡು ಬರುವವರು ಕೆಲವರು. ಒಂದು ಹರಿವಾಣದಲ್ಲಿ ಅರಿಶಿನ-ಕುಂಕುಮ, ತಾಳಿ ಇಟ್ಟು, "ನನ್ನ ಮಗಳಿಗೆ ಮದುವೆಯಿದೆ, ನಾನು ಬಡವ" ಎಂದೋ, "ನಾವು ತಿರುಪತಿಯ ದಾಸರು" ಎಂದೋ ಹೇಳಿಕೊಂಡು ಬರುವರು. ಅವರಿಗೆ ಅಡಿಕೆಯ ಜೊತೆಗೆ 'ದೇವರಿಗೆ' ಎಲಕ್ಕಿ, ಕಾಳುಮೆಣಸು ಸಹ ಬೇಕು! ಮತ್ತೆ ಕೆಲವರು ಶಕುನ ಹೇಳುವ ಹಾಲಕ್ಕಿಗಳು. ಅವರಿಗೆ ಬಟ್ಟೆಯೂ ಬೇಕು. ವಿದ್ಯಾರ್ಥಿಗಳೆಂದು ಹೇಳಿ ಬರುವವರು ಕೆಲವರು. ಇವರಿಗೆ ಇಷ್ಟು ದಿವಸ ಶಾಲೆಗೆ ಹೋಗಲು ತೊಂದರೆಯಿರಲಿಲ್ಲ. ಈ ಸಮಯ ಬಂದ ಕೂಡಲೇ ತೊಂದರೆ ಬಂದು ಬಿಟ್ಟಿತು. ಹೀಗೆ ಬರೆಯುತ್ತಾ ಹೋದರೆ ಮುಗಿಯುವುದೇ ಇಲ್ಲ. ಒಟ್ಟಿನಲ್ಲಿ ಸಂಭಾವನೆ ಅಡಿಕೆಗೆ ಬರಲು ಏನಾದರೊಂದು ನೆಪ.

ಪ್ರತಿಯೊಬ್ಬರಿಗೂ ಒಂದೊಂದು ಮುಷ್ಟಿ ಅಡಿಕೆ ಕೊಟ್ಟರೂ, ವರ್ಷಕ್ಕೆ 1 ಕ್ವಿಂಟಾಲ್‌ವರೆಗೆ ಅಡಿಕೆ ಬೇಕಾಗುತ್ತದೆ. ಈ ವರ್ಷವೂ ಬೆಳೆಗಾರರಿಗೆ ಇಷ್ಟೆಲ್ಲ ತೊಂದರೆಗಳ ನಡುವೆಯೂ ಇವರ ಹಾವಳಿಗೆ ತಡೆಯಾಗುವುದಿಲ್ಲ.

ಇವರುಗಳನ್ನು ನಿಯಂತ್ರಿಸುವುದು ಹೇಗೆ? 'ಸಂಭಾವನೆ ದೊರೆಯುವುದಿಲ್ಲ' ಎಂದು ಕೆಲವರು ಫಲಕ ಹಾಕಿದರು. ಆದರೂ ಇವರು ಬರುತ್ತಾರೆ! ಇದಕ್ಕೆ ಎಲ್ಲರೂ ಒಟ್ಟಾಗಿ ಅಡಿಕೆ ಕೊಡುವ ಪದ್ಧತಿಯನ್ನೇ ಸಾರಾಸಗಟಾಗಿ ನಿಲ್ಲಿಸುವುದು ಹೊರತು ಬೇರೆ ಉಪಾಯ ಕಾಣುವುದಿಲ್ಲ.

ಈ ಬಗ್ಗೆ ಇತರರೂ ಯೋಚಿಸಿ ಏನಾದರೊಂದು ಉಪಾಯ ಕಂಡು ಹಿಡಿದು ಈ ಕಿರುಕುಳ ಮತ್ತು ನಷ್ಟವನ್ನು ತಪ್ಪಿಸಬೇಕಾಗಿದೆ.

—ಎಚ್. ಎಂ. ಗಿರೀಶ್, ಹುಲಿಗದ್ದೆ.

## ಧೂಮಪಾನಕಡ್ಡಾಯನಿಷೇಧ: ಯಾರಿಗೆ!?

ಮಾನ್ಯರೆ,

ಪ್ರಯಾಣಿಕರು ಬಸ್ಸನ್ನು ಹತ್ತಿದ ಕೂಡಲೆ ಕಾಣುವ "ಧೂಮಪಾನವನ್ನು ಕಡ್ಡಾಯವಾಗಿ ನಿಷೇಧಿಸಲಾಗಿದೆ" ಎಂಬ ಕೆಂಪು ಬರಹವನ್ನು ನೋಡಿದರೆ 'ಯಾರಿಗೆ?' ಎಂದು ಸಮಸ್ಯೆಯಾಗುತ್ತದೆ. ಏಕೆಂದರೆ ಅದರ ಕೆಳಗೆ ಕುಳಿತಿರುವ ಚಾಲಕರು ಅದೊಂದು ಸ್ಟೈಲ್ ಎಂಬಂತೆ ಬಾಯಲ್ಲಿ ಸಿಗರೇಟ್ ಅಥವಾ ಬೀಡಿಯನ್ನು ಹಚ್ಚಿಕೊಂಡೇ ಸ್ಟೀರಿಂಗ್ ಹಿಡಿದಿರುವುದು ಸಾಮಾನ್ಯವಾಗಿ ದಿನ ನಿತ್ಯ ನಾವು ನೋಡುವ ದೃಶ್ಯ. ಬಸ್ಸಿನ ನಿರ್ವಾಹಕರೂ ಇದರಲ್ಲಿ ಹಿಂದಿಲ್ಲ.

ಇದರಿಂದ ಆ ಬರಹ ಬರೀ ಪ್ರಯಾಣಿಕರಿಗೆ ಮಾತ್ರವೆ? ಚಾಲಕ-ನಿರ್ವಾಹಕರಿಗೂ ಅದು ಸೇರಿದೆಯೋ ಇಲ್ಲವೊ ಎಂದು ಅನುಮಾನವಾಗುತ್ತದೆ 'ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ' ಎಂಬಂತೆ, ಧೂಮಪಾನ ಮಾಡುವ ಚಾಲಕ-ನಿರ್ವಾಹಕರನ್ನು ನೋಡಿ ಇತರರೂ ಕಡ್ಡಿ ಗೀಚುತ್ತಾರೆ ಹೀಗಾದರೆ, ಧೂಮಪಾನವನ್ನು ಬಸ್ಸುಗಳಲ್ಲಿ (ಹಾಗೂ ಚಿತ್ರ ಮಂದಿರಗಳಲ್ಲಿ) ನಿಷೇಧಿಸಲು ಸಾಧ್ಯವೆ ?

ಇನ್ನಾದರೂ ಸಂಬಂಧಪಟ್ಟವರು ಬಸ್ಸುಗಳಲ್ಲಿ ಮತ್ತು ಚಿತ್ರಮಂದಿರಗಳಲ್ಲಿ ಧೂಮಪಾನ ಮಾಡುವವರ ಬಗ್ಗೆ ಕ್ರಮ ತೆಗೆದುಕೊಂಡು, ಸ್ತ್ರೀಯರಿಗೆ, ಮಕ್ಕಳಿಗೆ ಮತ್ತು ಧೂಮಪಾನಿಗಳಲ್ಲದವರಿಗೆ ಇದರಿಂದಾಗುವ ತೊಂದರೆಯನ್ನು ತಪ್ಪಿಸುವರೆ ?

—ಬಾಣಂತಿ ಪ್ರಕಾಶ್, ಕುಡಿನಳ್ಳಿ.

## ಯಾರು ಸಾಯಬೇಕು-ಕಂತ್ರಿ ನಾಯಿಗಳೊ ಬಹೂಪಯೋಗಿ ಕುರಿಗಳೊ, ಮನುಷ್ಯರೊ?

ಎಲ್ಲೆಡೆ ಹುಚ್ಚು ನಾಯಿಗಳ ಹಾವಳಿ ವಿಪರೀತವಾಗಿದೆ ಹುಚ್ಚು ನಾಯಿ ಕಚ್ಚಿದ್ದಕ್ಕೆ ಕೊಡುವ ಲಸಿಕೆ ಎಷ್ಟಿದ್ದರೂ ಸಾಲುವುದಿಲ್ಲ. ಹಾಗಾಗಿ ಯಾವಾಗಲೂ ಅದರ ಕೊರತೆಯಿಂದ ಆತಂಕದ ಕ್ಷಣಗಳನ್ನೆದುರಿಸಬೇಕಾಗಿದೆ ಎಂದು ವೈದ್ಯಾಧಿಕಾರಿಗಳೊಬ್ಬರು ಬರೆಯುತ್ತಾರೆ.

ಹುಚ್ಚು ನಾಯಿ ಕಚ್ಚಿದಾಗ ಲಸಿಕೆಗಾಗಿ ಪರದಾಡುವ ಬದಲು ಅವುಗಳು ವೃದ್ಧಿಯಾಗದಂತೆ ತಡೆಯುವುದೇ ಅತಿ ಅಗತ್ಯದ ಮತ್ತು ಪರಿಣಾಮಕಾರಿ ಕ್ರಮ ಎನ್ನುವ ಅವರು ಇದಕ್ಕಾಗಿ ಎರಡು ಸುಲಭದ ಕ್ರಮಗಳನ್ನು ಸೂಚಿಸುತ್ತಾರೆ.

1) ಬೀಡಾಡಿ ನಾಯಿಗಳನ್ನು ನಿರ್ದಾಕ್ಷಿಣ್ಯವಾಗಿ ಕೊಲ್ಲುವುದು.

2) ನಾಯಿ ಸಾಕಿಕೊಳ್ಳುವವರು ಅವಕ್ಕೆ ಬೆಲ್ಟ್ ಹಾಕಿ ಗುರುತು ಮಾಡಿದರೆ ಮಾತ್ರ ಸಾಲದು; ಅವಕ್ಕೆ ಹುಚ್ಚು ನಾಯಿ ಕಡಿತದ ವಿರುದ್ಧ ಲಸಿಕೆ ಹಾಕಿಸಿ, ಆ ಬಗ್ಗೆ ದೃಢೀಕರಣ ಪತ್ರ ಹೊಂದಿರಬೇಕು (ಇದು ಎಲ್ಲ ಪಶು ವೈದ್ಯಾಲಯಗಳಲ್ಲಿ ಲಭ್ಯ )

ಪುರಸಭೆ, ಮಂಡಲ ಪಂಚಾಯ್ತಿಗಳವರು ಈ ಎರಡು ಕ್ರಮಗಳನ್ನೂ ಕಟ್ಟುನಿಟ್ಟಾಗಿ ಕೈಗೊಂಡು, ಅಸಂಖ್ಯ ಮುಗ್ಧರಿಗೆ, ಮುಖ್ಯವಾಗಿ ಮಕ್ಕಳಿಗೆ, ಆಗುತ್ತಿರುವ ತೊಂದರೆಯನ್ನು ನಿವಾರಿಸಲು ಪ್ರಾಮಾಣಿಕವಾಗಿ ಯತ್ನಿಸಬೇಕೆನ್ನುವ ಈ ವೈದ್ಯಾಧಿಕಾರಿಗಳು, ಈ ದಿಕ್ಕಿನಲ್ಲಿ ತನ್ನ ಪ್ರಯತ್ನಕ್ಕೆ ಸಂಬಂಧಪಟ್ಟವರಿಂದ ಇನ್ನಿಲ್ಲದ ನಿರುತ್ಸಾಹವನ್ನಷ್ಟೇ ಎದುರಿಸಿದ್ದಾಗಿ

(4ನೇ ಪುಟಕ್ಕೆ)

## ವನಮಹೋತ್ಸವವೊ, ರಾಜಕೀಯ ಸಭೆಯೋ?

(2ನೇ ಪುಟದಿಂದ)

ಸಭಿಕರಿಗೆ ಮನರಂಜನೆ ಒದಗಿಸಿದರೆ, ಕೆಲವು ಬಾರಿ ಬೇಸರ ಬರುವ ಮಾತುಗಳನ್ನಾಡಿದರು.

ಇನ್ನು ಸಮಾಜ ಸೇವೆಯ ಸೋಗು ಹಾಕುವ ಜೇಸೀಸ್, ಯುವ ಜನತೆಯ ಹೆಸರಲ್ಲಿ ಸಾಕಷ್ಟು ಹಣ ವ್ಯಯ ಮಾಡುವ ಎನ್ನೆಸ್ಸೆಸ್‌ಗಳವರ ವರ್ತನೆಯಲ್ಲೂ ಸಹಜತೆ, ಕಾಳಜಿಗಳಿಗಿಂತ ಬರೀ ನಾಟಕೀಯತೆಯೇ ಎದ್ದು ಕಾಣುತ್ತಿತ್ತು.

ಅಧ್ಯಕ್ಷತೆ ವಹಿಸಿದ್ದ ಜಿ.ಪ. ಅಧ್ಯಕ್ಷ ಎಸ್. ವಿ. ಮಂಜುನಾಥ್ ಮಾತ್ರ ಸ್ವಲ್ಪ ಮಟ್ಟಿನ ಪರಿಸರ ಕಾಳಜಿಯಿಂದ ಮಾತನಾಡಿದರೆನ್ನಿಸಿತು.

ಒಟ್ಟಾರೆ, ಈ ಕಾರ್ಯಕ್ರಮ ಒಂದು ದೊಡ್ಡ ರಾಜಕೀಯ ಕಾರ್ಯಕ್ರಮದಂತೆಯೇ ಅನ್ನಿಸಿತು. ಎಲ್ಲಾ ಪಕ್ಷಗಳ ಪುಡಾರಿಗಳ ದಂಡೇ ಚುನಾವಣೆ ಪ್ರಚಾರಕ್ಕೆ ಬಂದಂತಿತ್ತು. ಗಿಡ ನೆಟ್ಟು ಬೆಳೆಸುವ ಸ್ತುತ್ಯ ಕೆಲಸಕ್ಕೆ ಇಂಥ ಆಡಂಬರ, ರಾಜಕೀಯ ಮೇಲೋಗರವೆಲ್ಲ ಬೇಕೆ ?

ಇದೆಲ್ಲದರ ಬದಲು ಯಾರಾದರೊಬ್ಬರು ಪರಿಸರ ತಜ್ಞರನ್ನು ಕರೆಸಿ, ಅವರಿಂದ ಪರಿಸರ ಸಮತೋಲನದಲ್ಲಿ ಅರಣ್ಯಗಳ ಅಗತ್ಯತೆ ಮತ್ತು ವನಮಹೋತ್ಸವವನ್ನು ಯಶಸ್ವಿಗೊಳಿಸುವ ಬಗೆ-ಈ ಕುರಿತು ತಿಳುವಳಿಕೆ, ಮಾಹಿತಿ ನೀಡುವಂತೆ ಏರ್ಪಡಿಸಿದ್ದರೆ ಯುವ ಜನತೆಗೆ ಹೆಚ್ಚು ಪ್ರಯೋಜನವಾಗುತ್ತಿರಲಿಲ್ಲವೆ?

ಕೊನೆಯಲ್ಲಿ ವಲಯ ಅರಣ್ಯಾಧಿಕಾರಿ ಮುನಿಸ್ವಾಮಿಯವರು ಶೃಂಗೇರಿಯ ಹೊರ ವಲಯದಲ್ಲಿ 800 ಗಿಡಗಳನ್ನು ನೆಡುವ ಯೋಜನೆ ಇದೆ ಎಂದರು. ಇದಾದರೂ ಸಮರ್ಪಕವಾಗಿ ನಡೆದು ಅವುಗಳ ರಕ್ಷಣೆಗೆ ಸಾರ್ವಜನಿಕರ ಸಹಕಾರವೂ ದೊರೆತರೆ ಮಾತ್ರ ಅಷ್ಟಾದರೂ ಸಾರ್ಥಕವಾದೀತು.

ಈ ಟೀಕೆ ಸಂಬಂಧಿಸಿದವರಿಗೆ ಪಥ್ಯವಾಗುವುದಿಲ್ಲವೆಂದು ಗೊತ್ತು. "ಇವರಿಗೆ ಟೀಕೆ ಮಾಡುವುದು ಬಿಟ್ಟು ಬೇರೇನು ಗೊತ್ತು?" ಎಂಬ ತಿರಸ್ಕಾರವೂ ಬರುವುದು ನಿಶ್ಚಿತ. ಆದರೂ, ಮೆಚ್ಚಬಹುದಾದ ಅಂಶಗಳಿಗೇ ತತ್ತರಿಸಬೇಕಾದಂಥ ಈ ರೀತಿಯ ವಿಲಕ್ಷಣ ಕಾರ್ಯಕ್ರಮಗಳ ಬಗ್ಗೆ ಟೀಕಿಸದೆ ಸುಮ್ಮನಿರುವುದಾದರೂ ಹೇಗೆ?

—'ತಿರುಕ', ಶೃಂಗೇರಿ.

## ಸಾಮಾನ್ಯರಲ್ಲೊಬ್ಬ ಅಸಾಮಾನ್ಯ—ಚಂದ್ರು

(2ನೇ ಪುಟದಿಂದ)

ಕಾಯುತ್ತಿದ್ದರೂ ಚಂದ್ರು ಸ್ನೇಹ ಜೀವಿ. ಗೆಳೆಯರ ಬಳಗ ಕಟ್ಟಿಕೊಂಡು, ಎಷ್ಟೋ ಬಡವರಿಗೆ ರಾತ್ರಿ ಬೆಳಗಾಗುವುದರೊಳಗೆ ಮನೆ ಕಟ್ಟಿಕೊಟ್ಟು, ಅವರ ಸ್ವಂತ ಸೂರಿನ ಕನಸು ನನಸು ಮಾಡಿದವರು.

ನಿಷ್ಠೆಗೆ ಮತ್ತೊಂದು ಹೆಸರೆನ್ನಬಹುದಾದ ಚಂದ್ರು ಹಿಂದಿನ ಜನತಾ ಪಕ್ಷದ ಸಕ್ರಿಯ ಸದಸ್ಯರಾಗಿ, ಪಕ್ಷಕ್ಕಾಗಿ ವಿರೋಧಿಗಳೊಂದಿಗೆ ಕತ್ತಿ ಕಾಳಗಕ್ಕೂ ಇಳಿದವರು. ಆದರೆ ಇಂಥ ನಿಷ್ಠೆಗೆ ಪಕ್ಷದಲ್ಲಾಗಲಿ ಅದರ ನಾಯಕರಲ್ಲಾಗಲಿ ಬೆಲೆಯಿಲ್ಲದ್ದು ಕಂಡು ಪಕ್ಷದಿಂದ ದೂರಾಗಿದ್ದರು. ಇವರ ಸಾಮರ್ಥ್ಯದ ಅರಿವಿದ್ದ ಕಾಂಗ್ರೆಸ್‌ನವರು ಇವರನ್ನು ಹತ್ತಿರ ಮಾಡಿಕೊಂಡಿದ್ದರು. ಮಿತ್ರರಾಗಿದ್ದರು

ನೇರ ನಡೆ-ನುಡಿಯ ಚಂದ್ರು ಕೋಮುವಾದಿಗಳ ವಿರುದ್ಧ ತೀವ್ರ ಪ್ರತಿಭಟಿಸುತ್ತಿದ್ದರು. ಏಕಾಂಗಿ ಹೋರಾಟಕ್ಕೂ ಸಿದ್ಧ. ಆತ ಒಬ್ಬ ಜೊತೆಗಿದ್ದರೆ 10 ಮಂದಿ ಜೊತೆಗಿದ್ದಂತೆ. ಧೈರ್ಯಶಾಲಿ, ನಂಬಿಕೆಗೆ ಯೋಗ್ಯ. ದೇವರು, ದಿಂಡರು, ಜಾತಿ, ಧರ್ಮ, ಪಾಪ-ಪುಣ್ಯಗಳ ಬಗ್ಗೆ ತಲೆಕೆಡಿಸಿಕೊಳ್ಳದ ಚಂದ್ರು ತನ್ನ ಬದುಕನ್ನು ಪ್ರೀತಿಸುತ್ತಿದ್ದಷ್ಟೇ ಇನ್ನೊಬ್ಬರ ಬದುಕನ್ನೂ ಪ್ರೀತಿಸುತ್ತಿದ್ದರು.

ಇಂಥ ಚಂದ್ರು ಈಗ ನಮ್ಮ ನಡುವಿಲ್ಲ. ಅವರ ನೆನಪು ಮಾತ್ರ ಉಳಿದಿದೆ. [illegible] ಬಿಡುವವರಲ್ಲಿ ಆ ನೆನಪಿಗೆ ಬಂಡಿತ [illegible]

ಕೃಷ್ಣ ಭಂಡಾರಿ, [illegible]

# ಕಿಗ್ಗ ಮಾಧ್ಯಮಿಕ ಶಾಲೆಗೆ 75 ವರ್ಷ— ವಜ್ರ ಮಹೋತ್ಸವ ಆಚರಣೆಗೆ ಸಿದ್ಧತೆ

ಶೃಂಗೇರಿ ತಾಲ್ಲೂಕಿನ ಪ್ರಸಿದ್ಧ ಯಾತ್ರಾ ಸ್ಥಳವಾದ ಕಿಗ್ಗದ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯು 1914ರಲ್ಲಿ ಸ್ಥಾಪನೆಗೊಂಡಿದ್ದು, ಈ ಸಾಲಿಗೆ 75 ವರ್ಷಗಳನ್ನು ಪೂರೈಸಲಿದೆ.

ಈ ಶುಭ ಸಂದರ್ಭದಲ್ಲಿ ಶಾಲಾ ಶೈಕ್ಷಣಿಕ ಸಮಿತಿ ಹಾಗೂ ಇದಕ್ಕಾಗಿಯೇ ರಚಿತಗೊಂಡಿರುವ ವಜ್ರಮಹೋತ್ಸವ ಸಮಿತಿಯವರು 1990ನೇ ಇಸವಿ ಜನವರಿಯಲ್ಲಿ ವಜ್ರಮಹೋತ್ಸವವನ್ನು ನೆರವೇರಿಸಬೇಕೆಂದು ಸಂಕಲ್ಪಿಸಿದ್ದಾರೆ. ಈ ಸಮಾರಂಭವು ಹಳೇ ವಿದ್ಯಾರ್ಥಿಗಳ ಹಾಗೂ ಪೋಷಕರ ನೆರವಿನಿಂದಲೇ ನಡೆಯಬೇಕಾಗಿದ್ದು, ಸಮಾರಂಭದ ಯಶಸ್ಸಿಗೆ ಅನುಕೂಲವಾಗುವಂತೆ ಈ ಶಾಲೆಯ ಎಲ್ಲಾ ಹಳೇ ವಿದ್ಯಾರ್ಥಿಗಳನ್ನು ಸಂಪರ್ಕಿಸ ಬಯಸಿದ್ದಾರೆ.

ಆದ್ದರಿಂದ ಪರ ಸ್ಥಳಗಳಲ್ಲಿರುವ ಈ ಶಾಲೆಯ ಎಲ್ಲಾ ಹಳೇ ವಿದ್ಯಾರ್ಥಿಗಳು ತಮ್ಮ ವಿಳಾಸಗಳನ್ನು ಮುಖ್ಯ ಶಿಕ್ಷಕರು, ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಪಾಠಶಾಲೆ, ಕಿಗ್ಗ ಶೃಂಗೇರಿ ತಾ|| ಈ ವಿಳಾಸಕ್ಕೆ ಕಳಿಸಿಕೊಟ್ಟು, ಸಮಾರಂಭದ ಯಶಸ್ಸಿಗೆ ಸಹಕರಿಸಬೇಕಾಗಿ ಸಮಿತಿ ಕೋರಿದೆ.

## ಯಾರು ಸಾಯಬೇಕು?

(3ನೇ ಪುಟದಿಂದ)

ವಿಷಾದಿಸುತ್ತಾರೆ. ("ಇಲ್ಲಿ ಎಲ್ಲಕ್ಕೂ 'ಚಾಟಿ ಹಿಡಿದೇ' - ಭಯದ ವಾತಾವರಣದಲ್ಲೇ ಕೆಲಸ ಮಾಡಿಸಬೇಕೆ?")

ಅಂದ ಹಾಗೆ ಒಂದು 'ಡೋಸ್' ಇಂಥ ಲಸಿಕೆ ತಯಾರಿಸಲು ಹಲವು ಕುರಿಗಳನ್ನು ಸಾಯಿಸಬೇಕಾಗುತ್ತದಂತೆ. ಬಹು ಉಪಯೋಗಿಯಾದ ಅವುಗಳ ಸಾವನ್ನು ಲಸಿಕೆ ಗೋಸ್ಕರ ಹೆಚ್ಚಿಸುವುದಕ್ಕಿಂತ ಈ ಕಂತ್ರಿ ನಾಯಿಗಳನ್ನು ಸಾಯಿಸುವುದು ಲೇಸಲ್ಲವೆ?

## ಪೇಟೆ ಧಾರಣೆ

**ಅಡಿಕೆ**

ಶಿವಮೊಗ್ಗ : 25-8-1989

ಸರಕು : 3039-3510

ಬೆಟ್ಟೆ : 2309-2737

ಗೊರಬಲು : 1039-1645

ಸಾಗರ : 25.8.1989

ಇಡಿ : 2299-2409

ಚಾಲಿ : 2286-2543

ಆಪಿ : 3269-3519

ಸಿಪ್ಪೆ ಗೋಟು : 1090-1262

**ಕಾಳು ಮೆಣಸು**

ರೂ. 4402 ರಿಂದ 4549.

**ಏಲಕ್ಕಿ**

**ಕೊಪ್ಪ 26-8-89**

ಬಿಸಿಲಿನಲ್ಲಿ ಒಣಗಿಸಿದ್ದು 160-180

ಹಸಿರು ಕಾಯಿ 180-200

**ಜಿಲ್ಲಾ ಪರಿಷತ್, ಚಿಕ್ಕಮಗಳೂರು**

## ಸಹಾಯಕ ಕೃಷಿ ನಿರ್ದೇಶಕರವರ ಕಚೇರಿ, ಕೊಪ್ಪ

ಕ್ರಮ ಸಂ. ಲೆಕ್ಕ 1/ಸಕೃನಿ/ಕೊಪ್ಪ/ವಾಹನ ಎಂವೈಸಿ 2463/ಬಹಿರಂಗ ಹರಾಜು/89-90. ತಾ|| 17-8-89.

## ಜೀಪ್ ಹರಾಜು ಪ್ರಕಟಣೆ

ವಿಷಯ : ಸಹಾಯಕ ಕೃಷಿ ನಿರ್ದೇಶಕರ ಕಚೇರಿ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ ಇವರ ಕಚೇರಿಯ ಹಳೆಯದಾದ ಪೆಟ್ರೋಲ್ ಜೀಪ್ ನಂ. 2463ನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡುವ ಬಗ್ಗೆ.

ಉಲ್ಲೇಖ : ಸರ್ಕಾರದ ಪತ್ರದ ಕ್ರ. ಸಂ ಕೃತೋಇ : 13, ಕೃಇನಿ : 89, ದಿನಾಂಕ : 16 5 89.

ಕರ್ನಾಟಕ ಸರ್ಕಾರವು ಉಲ್ಲೇಖ ಒಂದರ ಪತ್ರದಲ್ಲಿ ಸಹಾಯಕ ಕೃಷಿ ನಿರ್ದೇಶಕರವರ ಕಛೇರಿ, ಕೊಪ್ಪ ಇವರ ಕಛೇರಿಗೆ ಸಂಬಂಧಪಟ್ಟ ಜೀಪ್ ನಂ ಎಂ.ವೈ.ಸಿ 2463ನ್ನು ಸರ್ಕಾರಕ್ಕೆ ಲಾಭದಾಯಕವಾಗುವ ರೀತಿಯಲ್ಲಿ ಹರಾಜು ಮಾಡಲು ಈ ಕೆಳಗೆ ಸಹಿ ಮಾಡಿರುವವರಿಗೆ ನಿರ್ದೇಶಿಸಿರುತ್ತಾರೆ. ಆ ಕಾರಣ, ಹರಾಜಿನಲ್ಲಿ ಮೇಲಿನ ವಾಹನವನ್ನು ಪಡೆಯಲು ಇಚ್ಛೆಯುಳ್ಳ ಎಲ್ಲರಿಗೂ ಈ ಮೂಲಕ ತಿಳಿಸುವುದೇನೆಂದರೆ, ಕೊಪ್ಪ ಸಹಾಯಕ ಕೃಷಿ ನಿರ್ದೇಶಕರವರ ಕಛೇರಿಯ ಆವರಣದಲ್ಲಿ ದಿನಾಂಕ : 8 9.89ರ ಶುಕ್ರವಾರ ಬೆಳಗ್ಗೆ 11-00 ಗಂಟೆಗೆ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳು ಅಥವಾ ಇವರು ಸೂಚಿಸಿರುವ ಅಧಿಕಾರಿಗಳು ಸಾರ್ವಜನಿಕ ಹರಾಜು ಮೂಲಕ ಜೀಪ್ ಹೇಗಿದೆಯೋ ಹಾಗೆಯೇ ಹರಾಜು ಮಾಡುತ್ತಾರೆಂದು ತಿಳಿಸಲಾಗಿದೆ.

ವಿವರವಾದ ಷರತ್ತುಗಳಿಗೆ ಸಹಾಯಕ ಕೃಷಿ ನಿರ್ದೇಶಕರು, ಕೊಪ್ಪ, ಇವರನ್ನು ಸಂಪರ್ಕಿಸಬಹುದು.

(ಸಹಿ) ಸಹಾಯಕ ಕೃಷಿ ನಿರ್ದೇಶಕರು,
ಕೊಪ್ಪ.

## ಜನತಾ ಪಕ್ಷದ ಕಛೇರಿ ಕುಂದು-ಕೊರತೆ ವಿಭಾಗ

ಕೊಪ್ಪ : ಇಲ್ಲಿನ ತಲವಾನೆ ಕಟ್ಟಡದಲ್ಲಿರುವ ತಾಲ್ಲೂಕು ಜನತಾ ಪಕ್ಷದ ಕಛೇರಿಗೆ ಸಾರ್ವಜನಿಕರ ಕುಂದು-ಕೊರತೆಗಳ ಬಗ್ಗೆ ಅರ್ಜಿ-ಮನವಿಗಳನ್ನು ಕಛೇರಿ ಸಹಾಯಕರ ಬಳಿ ಕೊಟ್ಟು ಹೋದಲ್ಲಿ, ಪ್ರತಿ ಸೋಮವಾರ ಅಧ್ಯಕ್ಷ ತಲವಾನೆ ಪ್ರಕಾಶ್ ಅವರೂ, ಉಳಿದ ದಿನಗಳಲ್ಲಿ ಇನ್ನಿತರ ನಾಯಕರುಗಳೂ ಸಂಬಂಧಪಟ್ಟ ಅಧಿಕಾರಿ / ಇಲಾಖೆಗಳೊಂದಿಗೆ ಮುಂದಿನ ಕ್ರಮದ ಬಗ್ಗೆ ವ್ಯವಹರಿಸುವರೆಂದು ಅಧ್ಯಕ್ಷರು ತಿಳಿಸಿದ್ದಾರೆ.



ಸಂಪಾದಕ, ಮುದ್ರಕ, ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅ[illegible] : ದೀ ಟಿಗೆ ಅಚ್ಚು ಕೂಟ, ಕೊಪ್ಪ